ಪ್ರವಾದಿ ಮುಹಮ್ಮದ್(ಸ) ರವರು ಕ್ರಿ.ಶ. 570 ರಲ್ಲಿ ಇಂದಿನ ಸೌದಿಅರೇಬಿಯಾದ ಮಕ್ಕಾ ನಗರದಲ್ಲಿ ಜನ್ಮ ತಾಳಿದರು. ಅವರು ಸಂಪೂರ್ಣ ಮಾನವ ಕುಲಕ್ಕೆ ಒಳಿತನ್ನು ಬೋಧಿಸಲು ಬಂದ ಮಾದರಿ ಪುರುಷರಾಗಿದ್ದಾರೆ. ಅವರು ಎಲ್ಲಾ ಸಮಯ-ದಲ್ಲೂ ಒಬ್ಬ ಗಮನಾರ್ಹ ವ್ಯಕ್ತಿಯಾಗಿದ್ದರು. ಪ್ರವಾದಿ, ಆಡಳಿತಗಾರ, ವಾಗ್ಮಿ, ಗಂಡ, ಗೆಳೆಯ, ತಂದೆ, ಚಿಕ್ಕಪ್ಪ, ಸೋದರಳಿಯ ಮತ್ತು ಅಜ್ಜನಾಗಿ ಅವರು ಎಲ್ಲ ಕ್ಷೇತ್ರ-ಗಳಲ್ಲೂ ತಮ್ಮ ಕರ್ತವ್ಯವನ್ನು ಅಪ್ರತಿಮವಾಗಿ ನಿರ್ವ-ಹಿಸಿದ್ದರು. ಅವರು ಪ್ರೀತಿ, ತಾಳ್ಮೆ, ಧೈರ್ಯ, ಯುಕ್ತಿ, ಔದಾರ್ಯ ಮತ್ತು ಬುದ್ಧಿವಂತಿಕೆಯ ಪ್ರತಿರೂಪವಾ-ಗಿದ್ದರು. ಅವರು ವಿಶ್ವದಾದ್ಯಂತ ಕೋಟ್ಯಂತರ ಜನರ ಸ್ಫೂರ್ತಿಯ ಸೆಲೆಯಾಗಿದ್ದಾರೆ.

ಪ್ರವಾದಿ ಮುಹಮ್ಮದ್(ಸ) ರನ್ನು ಸಂಪೂರ್ಣ ಮಾನವ-ಕುಲಕ್ಕೆ ಒಂದು ಕಾರುಣ್ಯವಾಗಿ ಕಳುಹಿಸಲಾಗಿದೆ ಎಂದು

ಪವಿತ್ರ ಕುರ್‌ಆನ್ ಹೇಳುತ್ತದೆ.

> “ಸರ್ವಲೋಕಗಳಿಗೆ ಒಂದು ಕರುಣೆಯಾಗಿಯಲ್ಲದೆ ನಾವು ತಮ್ಮನ್ನು ಕಳುಹಿಸಿಲ್ಲ.” (ಕುರ್‌ಆನ್ 21:107)

ಅವರ ಪ್ರವಾದಿತ್ವವು ಕ್ರಿ.ಶ. 610 ರಲ್ಲಿ ಪ್ರಾರಂಭವಾಗಿ ಕ್ರಿ.ಶ. 632 ರಲ್ಲಿ ಅವರ ಮರಣದೊಂದಿಗೆ ಕೊನೆಗೊಂಡಿತು. ಅವರಿಂದಾಗಿ ಮಾನವಕುಲವು ಅಜ್ಞಾನದಿಂದ ಜ್ಞಾನದ ಕಡೆಗೆ, ಪಥಭ್ರಷ್ಟತೆಯಿಂದ ಸನ್ಮಾರ್ಗದ ಕಡೆಗೆ, ದೇವನ ಕ್ರೋಧದಿಂದ ದೇವನ ಸಂತೃಪ್ತಿಯ ಕಡೆಗೆ ಸಾಗಿಸಲ್ಪಟ್ಟಿತು.

ತನ್ನ ಮರಣಕ್ಕೆ ಸ್ವಲ್ಪ ಸಮಯ ಮುಂಚೆ, ಅಂದರೆ ಪವಿತ್ರ ಹಜ್ ಸಮಯದಲ್ಲಿ ಅವರು ಮಕ್ಕಾ ನಗರದ ಸಮೀಪದ ಅರಫ ಎಂಬ ಸ್ಥಳದಲ್ಲಿ ಐತಿಹಾಸಿಕ ಭಾಷಣವನ್ನು ಮಾಡಿದರು. ಇದನ್ನು ‘ವಿದಾಯದ ಭಾಷಣ’

ಎಂದು ಕರೆಯಲಾಗುತ್ತದೆ. ಈ ಭಾಷಣವು ಅವರ ಅನುಯಾಯಿಗಳಿಗೆ ಸಂಬಂಧಿಸಿದಂತೆ ಒಂದು ಜ್ಞಾಪನೆಯಾಗಿತ್ತು. ಮಾತ್ರವಲ್ಲ, ಒಂದು ಮಹಾ ಉಪದೇಶವೂ ಆಗಿತ್ತು. ಈ ಭಾಷಣವು ಅವರ ಪ್ರವಾದಿತ್ವದ ಅಂತ್ಯವನ್ನು ಸಹ ಸೂಚಿಸುತ್ತದೆ.

ಹಿಜರಿ ಶಕೆಯ 10ನೇ ವರ್ಷವು ಮೂರು ಕಾರಣಗಳಿಗಾಗಿ ಅತ್ಯಂತ ಮಹತ್ವವನ್ನು ಪಡೆಯುತ್ತದೆ. ಮೊದಲನೆಯದಾಗಿ, ಆ ವರ್ಷ ಪ್ರವಾದಿಯವರು(ಸ) ತಮ್ಮ ವಿದಾಯ ಭಾಷಣವನ್ನು ನಿರ್ವಹಿಸಿದ್ದರು. ಎರಡನೆಯದಾಗಿ, ಆ ವರ್ಷ ಪೂರ್ತಿ ಅರೇಬಿಯನ್ ಉಪದ್ವೀಪದಾದ್ಯಂತವಿರುವ ಹಲವಾರು ಗೋತ್ರಗಳು ಮತ್ತು ಬುಡಕಟ್ಟು ಜನಾಂಗಗಳು ಪ್ರವಾದಿಯವರ(ಸ) ಬಳಿಗೆ ನಿಯೋಗಗಳನ್ನು ಕಳುಹಿಸಿದರು. ತಂಡೋಪತಂಡವಾಗಿ ಬಂದ ನಿಯೋಗಗಳು ಪ್ರವಾದಿಯವರ(ಸ) ಮುಂದೆ ತಮ್ಮ ಮತ್ತು ತಮ್ಮ ಗೋತ್ರ ಹಾಗೂ ಜನಾಂ-

ಗಗಳ ಇಸ್ಲಾಂ ಧರ್ಮ ಸ್ವೀಕಾರವನ್ನು ಘೋಷಿಸಿದರು. ಮೂರನೆಯದಾಗಿ, ಆ ವರ್ಷ ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದಂತೆ ಸುವರ್ಣ ವರ್ಷವಾಗಿತ್ತು. ಏಕೆಂದರೆ ಆ ವರ್ಷದಲ್ಲಿ ಲಕ್ಷಾಂತರ ಜನರು ಇಸ್ಲಾಂ ಸ್ವೀಕರಿಸಿದ್ದರು.

ಪ್ರವಾದಿ ಮುಹಮ್ಮದ್(ಸ) ಹಿಜರಿ ಶಕೆ 10ನೇ ವರ್ಷದಲ್ಲಿ ಹಜ್ಜ್ ನಿರ್ವಹಿಸಿದರು. ಇದು ಅವರ ಜೀವನದ ಮೊದಲ ಮತ್ತು ಕೊನೆಯ ಹಜ್ಜ್ ಆಗಿತ್ತು. ಇದನ್ನು ವಿದಾಯದ ಹಜ್ಜ್ ಎಂದು ಕರೆಯಲಾಗುತ್ತದೆ. ಈ ಹಜ್ಜ್‌ನಲ್ಲಿ ಅವರು ಹಜ್ಜ್ ಕರ್ಮ ನಿರ್ವಹಿಸುವುದು ಹೇಗೆಂದು ಪ್ರಾಯೋಗಿಕವಾಗಿ ತೋರಿಸಿಕೊಟ್ಟಿದ್ದರು.

ಪ್ರವಾದಿಯವರು(ಸ) ತಮ್ಮ ವಿದಾಯ ಭಾಷಣವನ್ನು ಕ್ರಿ.ಶ. 632 ನೇ ಇಸವಿಯಲ್ಲಿ, ಇಸ್ಲಾಮಿಕ್ ಕ್ಯಾಲೆಂಡರ್‌ನ 12ನೇ ತಿಂಗಳಾದ ದುಲ್ ಹಿಜ್ಜ ತಿಂಗಳ 9ನೇ ದಿನ, ಅಂದರೆ ವರ್ಷದ ಅತ್ಯಂತ ಶ್ರೇಷ್ಠ ದಿನದಲ್ಲಿ ನಿರ್ವಹಿಸಿದ್ದರು. ಪ್ರವಾದಿಯವರ(ಸ) ಈ ಭಾಷಣವನ್ನು ಕೇಳಲು

ಅಲ್ಲಿ ಲಕ್ಷಾಂತರ ಜನರು ಉಪಸ್ಥಿತರಿದ್ದರು.

## ವಿದಾಯ ಭಾಷಣ

ಅಲ್ಲಾಹನನ್ನು ಸ್ತುತಿಸಿ ಪ್ರಶಂಸಿಸಿದ ಬಳಿಕ ಪ್ರವಾದಿ ಮುಹಮ್ಮದರು(ಸ) ಹೇಳಿದರು.

ಜನರೇ, ಮುಂದಿನ ವರ್ಷ ನಾನು ನಿಮ್ಮ ಮಧ್ಯೆ ಜೀವಂತವಾಗಿ ಇರುತ್ತೇನೋ ಇಲ್ಲವೋ ಎಂದು ನನಗೆ ತಿಳಿದಿಲ್ಲ. ಆದ್ದರಿಂದ ನಾನು ಹೇಳುವ ಮಾತುಗಳನ್ನು ಕಿವಿಗೊಟ್ಟು ಕೇಳಿರಿ. ಇಲ್ಲಿ ಉಪಸ್ಥಿತರಿಲ್ಲದವರಿಗೆ ಈ ಮಾತುಗಳನ್ನು ತಲುಪಿಸಿಕೊಡಿ.

ಜನರೇ, ನೀವು ಈ ತಿಂಗಳನ್ನು, ಈ ದಿನವನ್ನು ಮತ್ತು ಈ ನಗರವನ್ನು ಪವಿತ್ರವೆಂದು ಪರಿಗಣಿಸುತ್ತೀರಿ. ಅದೇ ರೀತಿ ಮುಸಲ್ಮಾನರ ಜೀವ ಮತ್ತು ಆಸ್ತಿ–ಪಾಸ್ತಿಗಳನ್ನು ಕೂಡ ಪವಿತ್ರವೆಂದು ಪರಿಗಣಿಸಿರಿ. ನಿಮ್ಮ ಮೇಲೆ ನಂಬಿಕೆ ಇಟ್ಟು ಒಪ್ಪಿಸಲಾದ ವಸ್ತುಗಳನ್ನು ಅದರ ನೈಜ

ಮಾಲೀಕರಿಗೆ ಹಿಂದುರಿಗಿಸಿರಿ. ನೀವು ಯಾರಿಗೂ ನೋಯಿಸಬೇಡಿ. ನಿಮಗೂ ಯಾರೂ ನೋಯಿಸದಿರಲಿ.

ನೆನಪಿಡಿ. ನೀವು ಖಂಡಿತವಾಗಿಯೂ ನಿಮ್ಮ ಸೃಷ್ಟಿಕರ್ತನನ್ನು ಭೇಟಿಯಾಗುತ್ತೀರಿ. ಆಗ ಅವನು ನಿಮ್ಮ ಕರ್ಮಗಳ ಬಗ್ಗೆ ವಿಚಾರಣೆ ಮಾಡುವನು.

ಜನರೇ, ಅಲ್ಲಾಹು ನಿಮಗೆ ಬಡ್ಡಿಯನ್ನು ನಿಷೇಧಿಸಿದ್ದಾನೆ. ಆದ್ದರಿಂದ ಎಲ್ಲಾ ರೀತಿಯ ಬಡ್ಡಿಗಳನ್ನು ನಾನು ಇಂದು ಮನ್ನಾ ಮಾಡುತ್ತಿದ್ದೇನೆ. ನಿಮ್ಮ ಬಂಡವಾಳವು ನಿಮ್ಮದಾಗಿದೆ. ಅದನ್ನು ನೀವೇ ಇಟ್ಟುಕೊಳ್ಳಿ. ನೀವು ಯಾವುದೇ ಅಸಮಾನತೆ ತೋರಬಾರದು ಮತ್ತು ನಿಮಗೂ ಯಾವುದೇ ಅಸಮಾನತೆ ಉಂಟಾಗದಿರಲಿ. ಯಾವುದೇ ಬಡ್ಡಿಯೂ ಇರಬಾರದೆಂದು ಅಲ್ಲಾಹು ತೀರ್ಮಾನಿಸಿದ್ದಾನೆ. ಅಬ್ಬಾಸ್ ಬಿನ್ ಅಬ್ದುಲ್ ಮುತ್ತಲಿಬ್‌ರಿಗೆ (ಪ್ರವಾದಿಯವರ ಚಿಕ್ಕಪ್ಪ) ಬರಬೇಕಾದ ಎಲ್ಲಾ

ಬಡ್ಡಿಗಳನ್ನು ನಾನು ಇಂದು ಮನ್ನಾ ಮಾಡುತ್ತಿದ್ದೇನೆ.

ಜನರೇ, ನಿಮ್ಮ ಧರ್ಮದ ಸುರಕ್ಷತೆಗಾಗಿ ಶೈತಾನನ ಬಗ್ಗೆ ಎಚ್ಚರವಾಗಿರಿ. ದೊಡ್ಡ ದೊಡ್ಡ ವಿಷಯಗಳಲ್ಲಿ ನಿಮ್ಮನ್ನು ದಾರಿತಪ್ಪಿಸಲಾಗದು ಎಂದು ಅವನಿಗೆ ನಿರಾಶೆಯಿದೆ. ಆದ್ದರಿಂದ ಸಣ್ಣ ಸಣ್ಣ ವಿಷಯಗಳಲ್ಲಿ ಅವನನ್ನು ಹಿಂಬಾಲಿಸುವುದರ ಬಗ್ಗೆ ಎಚ್ಚರವಾಗಿರಿ.

ಜನರೇ, ನಿಮಗೆ ನಿಮ್ಮ ಪತ್ನಿಯರ ಮೇಲೆ ಕೆಲವು ಹಕ್ಕುಗಳಿವೆ ಎಂಬುದು ನಿಜ. ಆದರೆ ಅವರಿಗೂ ಸಹ ನಿಮ್ಮ ಮೇಲೆ ಕೆಲವು ಹಕ್ಕುಗಳಿವೆ. ನೆನಪಿಡಿ. ನೀವು ಅವರನ್ನು ಜೀವನ ಸಂಗಾತಿಯನ್ನಾಗಿ ಮಾಡಿಕೊಂಡಿರುವುದು ಅಲ್ಲಾಹನ ಕಡೆಯ ಕರಾರು ಮತ್ತು ಅಪ್ಪಣೆಯ ಪ್ರಕಾರವಾಗಿದೆ. ಅವರು ನಿಮ್ಮ ಹಕ್ಕುಗಳನ್ನು ಪಾಲಿಸಿದರೆ ಅವರಿಗೆ ಆಹಾರ ಮತ್ತು ಉಡುಪನ್ನು ಒದಗಿಸಬೇಕಾದ ಕರ್ತವ್ಯ ನಿಮ್ಮದಾಗಿದೆ. ಅವರೊಂದಿಗೆ ಅತ್ಯುತ್ತಮವಾಗಿ ಮತ್ತು ಸೌಮ್ಯವಾಗಿ ವರ್ತಿಸಿರಿ. ಏಕೆಂದರೆ ಅವರು ನಿಮ್ಮ

ಪಾಲುದಾರರು ಮತ್ತು ಸಹಾಯಕರಾಗಿದ್ದಾರೆ. ನೀವು ಇಷ್ಟಪಡದ ಯಾರೊಂದಿಗೂ ಗೆಳೆತನ ಮಾಡಬಾರ-ದು ಮತ್ತು ಅಸಭ್ಯತೆ ಪ್ರದರ್ಶಿಸಬಾರದು ಎನ್ನುವುದು ಅವರ ಮೇಲೆ ನಿಮಗಿರುವ ಹಕ್ಕಾಗಿದೆ.

ಜನರೇ, ಕಿವಿಗೊಟ್ಟು ಕೇಳಿ. ಅಲ್ಲಾಹನನ್ನು ಮಾತ್ರ ಆರಾಧಿಸಿರಿ. ದೈನಂದಿನ ಐದು ವೇಳೆಯ ನಮಾ-ಝ್‌ಗಳನ್ನು ತಪ್ಪದೆ ನಿರ್ವಹಿಸಿರಿ. ರಮದಾನ್ ತಿಂಗಳ-ಲ್ಲಿ ಉಪವಾಸ ಆಚರಿಸಿರಿ. ಝಕಾತ್ (ಕಡ್ಡಾಯದಾನ) ನೀಡಿರಿ. ಸಾಧ್ಯವಿದ್ದರೆ ಹಜ್ಜ್ ನಿರ್ವಹಿಸಿರಿ.

ಜನರೇ, ನೀವೆಲ್ಲರೂ ಆದಮ್ ಮತ್ತು ಹವ್ವಾ ದಂ-ಪತಿಗಳ ಮಕ್ಕಳು. ಅರಬನಿಗೆ ಅರಬೇತರನ ಮೇಲೆ ಯಾವುದೇ ಶ್ರೇಷ್ಠತೆಯಿಲ್ಲ. ಅರಬೇತರನಿಗೆ ಅರಬನ ಮೇಲೆ ಯಾವುದೇ ಶ್ರೇಷ್ಠತೆಯಿಲ್ಲ. ಬಿಳಿಯನಿಗೆ ಕರಿಯನ ಮೇಲೆ ಯಾವುದೇ ಶ್ರೇಷ್ಠತೆಯಿಲ್ಲ. ಕರಿ-ಯನಿಗೆ ಬಿಳಿಯನ ಮೇಲೆ ಯಾವುದೇ ಶ್ರೇಷ್ಠತೆ ಇಲ್ಲ.

(ಅಂದರೆ ಯಾರಿಗೂ ಯಾರ ಮೇಲೆಯೂ ಯಾವುದೇ ಶ್ರೇಷ್ಠತೆಯ ಇಲ್ಲ) ಶ್ರೇಷ್ಠತೆಯಿರುವುದು ದೇವಭಕ್ತಿ ಮತ್ತು ಸತ್ಕರ್ಮದ ಮಾನದಂಡದಲ್ಲಿ ಮಾತ್ರವಾಗಿದೆ.

ತಿಳಿಯಿರಿ, ಒಬ್ಬ ಮುಸಲ್ಮಾನ ಇನ್ನೊಬ್ಬ ಮುಸಲ್ಮಾನ-ನಿಗೆ ಸಹೋದರನಾಗಿದ್ದಾನೆ. ಮುಸಲ್ಮಾನರು ಪರಸ್ಪರ ಸಹೋದರರಾಗಿದ್ದಾರೆ. ಒಬ್ಬ ಮುಸಲ್ಮಾನನಿಗೆ ಸೇರಿದ ಒಂದು ವಸ್ತು, ಅವನು ಅದನ್ನು ಉಚಿತವಾಗಿ ಅಥವಾ ಸ್ವಯಂಪ್ರೇರಿತವಾಗಿ ನೀಡಿದ ಹೊರತು ಇನ್ನೊಬ್ಬನ ಹಕ್ಕಾಗುವುದಿಲ್ಲ. ಆದ್ದರಿಂದ ನೀವು ಪರಸ್ಪರ ಅನ್ಯಾ-ಯವೆಸಗಬಾರದು.

ನೆನಪಿಡಿ. ಒಂದು ದಿನ ನೀವು ನಿಮ್ಮ ಸೃಷ್ಟಿಕರ್ತನ ಮುಂದೆ ಹಾಜರಾಗಿ ನೀವು ಮಾಡಿದ ಕರ್ಮಗಳಿಗೆ ಉತ್ತರವನ್ನು ನೀಡಬೇಕಾಗಿದೆ. ಆದ್ದರಿಂದ ಹುಷಾರು! ನನ್ನ ಮರಣಾನಂತರ ನೀವು ಪುನಃ ತಪ್ಪುದಾರಿಗೆ ಮರಳಿ ಹೋಗಬೇಡಿ.

ಜನರೇ, ನನ್ನ ನಂತರ ಒಬ್ಬ ಪ್ರವಾದಿಯೋ ಒಂದು ಹೊಸ ಧರ್ಮವೋ ಬರಲಿಕ್ಕಿಲ್ಲ. ಆದ್ದರಿಂದ ಚೆನ್ನಾಗಿ ಆಲೋಚಿಸಿರಿ. ಜನರೇ, ನಾನು ಹೇಳುವ ಮಾತುಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಿರಿ. ನಾನು ನಿಮ್ಮ ಮುಂದೆ ಎರಡು ವಸ್ತುಗಳನ್ನು ಬಿಟ್ಟು ಹೋಗುತ್ತಿದ್ದೇನೆ. ಅಲ್ಲಾಹನ ಗ್ರಂಥ ಮತ್ತು ನನ್ನ ಜೀವನ ಚರ್ಯೆ. ಇವೆರಡನ್ನು ಗಟ್ಟಿಯಾಗಿ ಹಿಡಿದುಕೊಂಡಿರುವ ತನಕ ನೀವು ಎಂದಿಗೂ ದಾರಿ ತಪ್ಪಲಾರಿರಿ.

ನನ್ನ ಮಾತುಗಳನ್ನು ಕೇಳಿದವರೆಲ್ಲರೂ ಇದನ್ನು ಇಲ್ಲಿ ಉಪಸ್ಥಿತರಿಲ್ಲದ ಜನರಿಗೆ ತಲುಪಿಸಿ ಕೊಡಬೇಕು. ಏಕೆಂದರೆ ನನ್ನ ಮಾತುಗಳನ್ನು ಪ್ರತ್ಯಕ್ಷವಾಗಿ ಕೇಳಿದವರಿಗಿಂತಲೂ ಪರೋಕ್ಷವಾಗಿ ಕೇಳಿದವರು ಚೆನ್ನಾಗಿ ಅರ್ಥಮಾಡಿಕೊಳ್ಳಬಹುದು.

ಅಲ್ಲಾಹನೇ, ನೀನೇ ಸಾಕ್ಷಿ. ಇಗೋ, ನಾನು ನನ್ನ ಜನರಿಗೆ ನಿನ್ನ ಸಂದೇಶವನ್ನು ತಲುಪಿಸಿ ಕೊಟ್ಟಿದ್ದೇನೆ.

ಹೀಗೆ ಪ್ರವಾದಿ ಮುಹಮ್ಮದರು(ಸ) ತಮ್ಮ ವಿದಾಯ ಭಾಷಣವನ್ನು ಮುಗಿಸಿದರು. ಆಗ ಪವಿತ್ರ ಕುರ್‌ಆನಿನ ಈ ವಚನವು ಅವತೀರ್ಣವಾಯಿತು.

> “ಇಂದು ನಾನು ನಿಮಗೆ ನಿಮ್ಮ ಧರ್ಮವನ್ನು ಪೂರ್ತಿಗೊಳಿಸಿದ್ದೇನೆ, ಮತ್ತು ನನ್ನ ಅನುಗ್ರಹವನ್ನು ನಿಮ್ಮ ಮೇಲೆ ಪೂರ್ಣಗೊಳಿಸಿದ್ದೇನೆ ಹಾಗೂ ಇಸ್ಲಾಂ ಧರ್ಮವನ್ನು ನಿಮಗೆ ಧರ್ಮವಾಗಿ ತೃಪ್ತಿಪಟ್ಟಿದ್ದೇನೆ. (ಕುರ್‌ಆನ್ 5:3)

ಇಂದು ಕೂಡ ಪ್ರವಾದಿ ಮುಹಮ್ಮದರ(ಸ) ಈ ವಿದಾಯ ಭಾಷಣವನ್ನು ಜಗತ್ತಿನ ಮೂಲೆ ಮೂಲೆಯಲ್ಲಿರುವ ಜನರಿಗೂ ಎಲ್ಲಾ ರೀತಿಯ ಸಂವಹನ ಸಾಧನಗಳನ್ನು ಬಳಸಿ ತಲುಪಿಸಿ ಕೊಡಲಾಗುತ್ತಿದೆ. ಇದರ ಬಗ್ಗೆ ಮಸೀದಿಗಳಲ್ಲಿ ಮತ್ತು ಧಾರ್ಮಿಕ ಪ್ರವಚನಗಳಲ್ಲಿ ನೆನಪಿಸಲಾಗುತ್ತದೆ. ಈ ಭಾಷಣದಲ್ಲಿರುವ

ವಿಷಯಗಳು ನಿಜಕ್ಕೂ ಬೆರಗುಗೊಳಿಸುವಂತಹದ್ದಾಗಿದೆ, ಜನರ ಮೇಲೆ ಸೃಷ್ಟಿಕರ್ತನಿಗಿರುವ, ಮತ್ತು ಜನರಿಗೆ ಜನರ ಮೇಲಿರುವ ಕೆಲವು ಹಕ್ಕುಗಳನ್ನು ತಿಳಿಸುತ್ತದೆ. ಪ್ರವಾದಿಯವರ(ಸ) ಆತ್ಮವು ಈ ಜಗತ್ತಿನಿಂದ ಬೇರ್ಪಟ್ಟಿದ್ದರೂ ಅವರ ಮಾತುಗಳು ನಮ್ಮ ಹೃದಯಗಳಲ್ಲಿ ಈಗಲೂ ಜೀವಂತವಾಗಿವೆ.

